KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವಂಬರ್ ೧೬, ೨೦೦೬ (ಕಾರ್ತಿಕ ೨೫, ಶಕವರ್ಷ ೧೯೨೮) | ಸಂಚಿಕೆ ೪೫ |
|---|---|---|

## ಭಾಗ - ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಯವರ ಕಾರ್ಯಾಲಯ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು**
**ತಿದ್ದುಪಡಿ ಅಧಿಸೂಚನೆ**
**ಕ್ರಮಾಂಕ: ಎಲ್ಎಕ್ಯೂ.ಎಸ್.ಸಿಆರ್.41/ 2006-07, ದಿನಾಂಕ:7ನೇ ನವಂಬರ್, 2006**

ಈ ಕಛೇರಿಯ ಕ್ರಮಾಂಕ ಎಲ್.ಎ.ಕ್ಯೂ.ಎಸ್.ಆರ್.02:03-04 ದಿನಾಂಕ:30.07.2005ರಂತೆ ಕನಕಪುರ ತಾಲ್ಲೂಕು ಕೋಡಿಹಳ್ಳಿ ಹೋಬಳಿ ತಟ್ಟೆಕೆರೆ ಗ್ರಾಮದ ಸರ್ವೆ ನಂ.146ರ ಜಮೀನು ವಿದ್ಯುತ್ ಸ್ಥಾವರ ಘಟಕ ಸ್ಥಾಪಿಸಲು ಭೂ ಸ್ವಾಧೀನದ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದ ಭಾಗ-6ರ ಪುಟ 952ರಲ್ಲಿ ದಿನಾಂಕ:01.12.2005ರ ಗುರುವಾರದಂದು ಪ್ರಕಟಿಸಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡಂತೆ ತಿದ್ದುಪಡಿಗಳನ್ನು ಮಾಡಿಕೊಳ್ಳಲು ಈ ಮೂಲಕ ತಿಳಿಸಿದೆ.

**ತಿದ್ದುಪಡಿ ಅನುಸೂಚಿ**

**ಜಿಲ್ಲೆ: ಬೆಂಗಳೂರು (ಗ್ರಾ) ತಾಲ್ಲೂಕು: ಕನಕಪುರ ಹೋಬಳಿ: ಕೋಡಿಹಳ್ಳಿ ಗ್ರಾಮ: ತಟ್ಟೆಕೆರೆ**

| ಕ್ರ. ಸಂ. | ಕಾಲಂ ಸಂಖ್ಯೆ | ಬದಲು | ಎಂದು ಓದಿಕೊಳ್ಳಿ ಎ.ಗುಂ. |
|---|---|---|---|
| 1. | 10 | 0-00 | 4-00 |

ಜಿಲ್ಲಾಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್.357

**ಉಪವಿಭಾಗಾಧಿಕಾರಿಗಳು, ದೊಡ್ಡಬಳ್ಳಾಪುರ ಉಪವಿಭಾಗ, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, ಬೆಂಗಳೂರು**
**ಭೂ ಸ್ವಾಧೀನ ಕಾಯಿದೆ 1894 ಕಲಂ 16(2) ರನ್ವಯ**
**ಕ್ರಮಾಂಕ: ಎಲ್.ಎ.ಕ್ಯೂ.ಎಸ್.ಆರ್.1/ 2003-04**

ಕರ್ನಾಟಕ ಸರ್ಕಾರದ ಅಧಿನಿಯಮ 1961ರಲ್ಲಿ ತಿದ್ದುಪಡಿಯಾದಂತೆ ಭೂ ಸ್ವಾಧೀನ ಅಧಿನಿಯಮ 1894ರನ್ವಯ ಕಲಂ 16ರ ಪ್ರಕರಣ(2) ಉಪ ಪ್ರಕರಣದ ಮೇರೆಗೆ ಈ ಮುಂದಿನ ಅಧಿಸೂಚನೆಯಲ್ಲಿ ಸೂಚಿಸಲಾದ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ನಬಾರ್ಡ್ ಯೋಜನೆಯಲ್ಲಿ ತಮಿಳುನಾಡು ಗಡಿಯಿಂದ ಆಂಧ್ರ ಪ್ರದೇಶದ ರಸ್ತೆಯು ಕಿ.ಮೀ. 141-20ರಲ್ಲಿ ಸೇತುವೆ ಮತ್ತು ರಸ್ತೆ ನಿರ್ಮಿಸುವ ಉದ್ದೇಶಕ್ಕಾಗಿ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ತುಮಕೂರು ವಿಭಾಗ, ತುಮಕೂರುರವರಿಗೆ ಭೂ ಸ್ವಾಧೀನ ಕಾಯ್ದೆ ಪ್ರಕರಣ 16ರ ಉಪಪ್ರಕರಣ (1)ರಲ್ಲಿ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರಿಗೂ ಮತ್ತು ಸಂಬಂಧಿಸಿದವರ ತಿಳುವಳಿಕೆಗಾಗಿ ಈ ಅಧಿಸೂಚನೆ ನೀಡುವುದರ ಮೂಲಕ ಪ್ರಕಟಿಸಲಾಗಿದೆ.

**ಜಿಲ್ಲೆ: ಬೆಂಗಳೂರು ಗ್ರಾಮಾಂತರ ತಾಲ್ಲೂಕು: ನೆಲಮಂಗಲ ಹೋಬಳಿ: ಸೋಂಪುರ ಗ್ರಾಮ: ಮಾಕನಹಳ್ಳಿ**

| ಕ್ರ. ಸಂ. | ಸರ್ವೆ ನಂ. | ಜಮೀನಿನ ತರಹೆ | ವಿಸ್ತೀರ್ಣ (ಎ.ಗುಂ.) | ಮಾಲ್ಕಿ | ಜಮೀನನ್ನು ವಶಪಡಿಸಿಕೊಂಡ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | 67/2 | ಖುಷ್ಕಿ | 0-30 | ಯಾವುದು ಇಲ್ಲ | 15.03.2006 |

ಉಪವಿಭಾಗಾಧಿಕಾರಿ ಹಾಗೂ ಭೂ
ಸ್ವಾಧೀನಾಧಿಕಾರಿಗಳು,
ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್.362

## ತಹಶೀಲ್ದಾರ್‌ರವರ ಕಾರ್ಯಾಲಯ, ಮಾಗಡಿ ತಾಲ್ಲೂಕು, ಮಾಗಡಿ
## ಅಧಿಸೂಚನೆ
## ಸಂಖ್ಯೆ: ಎಲ್‌ಎನ್‌ಡಿ.ಸಿ.ಆರ್: 257: 2005-06, ದಿನಾಂಕ:28ನೇ ಅಕ್ಟೋಬರ್, 2006

**ವಿಷಯ:** ಮಾಗಡಿ ತಾಲ್ಲೂಕು ತಿಪ್ಪಸಂದ್ರ ಹೋಬಳಿ ಹೊನ್ನಾಪುರ ಗ್ರಾಮದ ಸ.ನಂ. 3ರಲ್ಲಿ 0-11 ಗುಂಟೆ ಸರ್ಕಾರಿ ಗುಂಡು ತೋಪು ಜಮೀನನನ್ನು ಸಾರ್ವಜನಿಕವಾಗಿ ಬಹಿರಂಗ ಹರಾಜು ಮಾಡುವ ಬಗ್ಗೆ.

ಮಾಗಡಿ ತಾಲ್ಲೂಕು ತಿಪ್ಪಸಂದ್ರ ಹೋಬಳಿ ಹೊನ್ನಾಪುರ ಗ್ರಾಮದ ಸ.ನಂ.3ರಲ್ಲಿ 0-11 ಗುಂಟೆ ಸರ್ಕಾರಿ ಗುಂಡುತೋಪು ಜಮೀನು ಇದ್ದು, ಈ ಜಮೀನು ಸಾರ್ವಜನಿಕರ ಉಪಯೋಗಕ್ಕೆ ಯಾವುದೇ ರೀತಿಯಲ್ಲಿ ಉಪಯೋಗವಾಗುತ್ತಿರುವುದಿಲ್ಲವಾದ್ದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಅಧಿನಿಯಮ 68(1) ನಿಯಮ 94ರಂತೆ ಈ ಜಮೀನಿಗೆ ಇದ್ದ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ ಸದರಿ ಜಮೀನನ್ನು ಸಾರ್ವಜನಿಕವಾಗಿ ಬಹಿರಂಗ ಹರಾಜು ಮಾಡಲಾಗುವುದು. ಈ ಬಗ್ಗೆ ಸಾರ್ವಜನಿಕರಿಂದ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಈ ಕೆಳಗೆ ಸಹಿ ಮಾಡಿರುವವರಿಗೆ 90 ದಿವಸಗಳೊಳಗೆ ನಿಮ್ಮ ಆಕ್ಷೇಪಣೆಗಳನ್ನು ಲಿಖಿತ ಮೂಲಕ ಸಲ್ಲಿಸಲು ತಿಳಿಸಲಾಗಿದೆ. ಸ್ವತ್ತಿನ ವಿವರ ಈ ಕೆಳಕಂಡಂತೆ ಇರುತ್ತವೆ.

| ಕ್ರ. ಸಂ. | ಗ್ರಾಮದ ಹೆಸರು | ಸ.ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|
| 1. | ಹೊನ್ನಾಪುರ | 3 | 0-11 | ಗುಂಡುತೋಪು | ಪೂರ್ವ: ಸ.ನಂ.7ರ ಜಮೀನು<br>ಪಶ್ಚಿಮ: ಸ.ನಂ.9ರ ಜಮೀನು<br>ಉತ್ತರ : ಸ.ನಂ.3ರ ಜಮೀನು<br>ದಕ್ಷಿಣ : ಸ.ನಂ.4ರ ಜಮೀನು |

ತಹಶೀಲ್ದಾರ್,
ಮಾಗಡಿ ತಾಲ್ಲೂಕು, ಮಾಗಡಿ.

ಪಿ.ಆರ್.363

## ತಹಶೀಲ್ದಾರ್‌ರವರ ಕಾರ್ಯಾಲಯ, ಮಾಗಡಿ ತಾಲ್ಲೂಕು, ಮಾಗಡಿ
## ಸಾರ್ವಜನಿಕ ಪ್ರಕಟಣೆ
## ನಮೂನೆ-27
## (ಭೂ ಕಂದಾಯ ಅಧಿನಿಯಮ 68(1) ನಿಯಮ 94ರಂತೆ)
## ಸಂಖ್ಯೆ: ಎಲ್‌ಎನ್‌ಡಿ.ಸಿ.ಆರ್: 112: 2006-07, ದಿನಾಂಕ:7ನೇ ನವಂಬರ್, 2006

**ಗ್ರಾಮ: ಹುಲಿಕಟ್ಟೆ ಹೋಬಳಿ: ಮಾಡಬಾಳ್ ತಾಲ್ಲೂಕು: ಮಾಗಡಿ ಜಿಲ್ಲೆ: ಬೆಂಗಳೂರು ಗ್ರಾಮಾಂತರ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಅಧಿನಿಯಮ 68(1)ರ ನಿಯಮ 94ರಂತೆ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನು ಸಾರ್ವಜನಿಕ ಸರ್ಕಾರಿ ಗುಂಡುತೋಪು ಜಮೀನಾಗಿದ್ದು, ಇದು ಸಾರ್ವಜನಿಕರ ಉಪಯೋಗಕ್ಕೆ ಯಾವುದೇ ರೀತಿಯಲ್ಲಿ ಉಪಯೋಗವಾಗುತ್ತಿರುವುದಿಲ್ಲವಾದ್ದರಿಂದ ಈ ಜಮೀನಿಗೆ ಇದ್ದ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ ಸದರಿ ಪ್ರದೇಶವನ್ನು ಸಾರ್ವಜನಿಕವಾಗಿ ಬಹಿರಂಗ ಹರಾಜು ಮಾಡಲು ಉದ್ದೇಶಿಸಿದ್ದು ಈ ಬಗ್ಗೆ ಸಾರ್ವಜನಿಕರಿಂದ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಈ ಕೆಳಗೆ ಸಹಿ ಮಾಡಿರುವವರಿಗೆ 90 ದಿನಗಳೊಳಗೆ ಲಿಖಿತ ಮೂಲಕ ಸಲ್ಲಿಸಲು ತಿಳಿಸಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

| ಕ್ರ. ಸಂ. | ಗ್ರಾಮದ | ಸ.ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|
| 1. | ಹುಲಿಕಟ್ಟೆ | 36 | 4-12 | ಗುಂಡುತೋಪು | ಪೂರ್ವ: ಸ.ನಂ.36<br>ಪಶ್ಚಿಮ: ಸ.ನಂ.36<br>ಉತ್ತರ : ಸ.ನಂ.36<br>ದಕ್ಷಿಣ : ಸ.ನಂ.36 |
| 2. | ಹುಲಿಕಟ್ಟೆ | 38 | 1-26 | ಗುಂಡುತೋಪು | ಪೂರ್ವ: ಸ.ನಂ.39<br>ಪಶ್ಚಿಮ: ರಸ್ತೆ<br>ಉತ್ತರ : ಸ.ನಂ.39<br>ದಕ್ಷಿಣ : ಸ.ನಂ.36 |

ತಹಶೀಲ್ದಾರ್,
ಮಾಗಡಿ ತಾಲ್ಲೂಕು, ಮಾಗಡಿ.

ಪಿ.ಆರ್.364

## ಪುರಪಂಚಾಯತ್ ಕಾರ್ಯಾಲಯ, ತೀರ್ಥಹಳ್ಳಿ
## ಪ್ರಕಟಣೆ
## ನಂ. ಮುನ್(6) ಸಿ.ಆರ್.10/ 06-07, ದಿನಾಂಕ:8ನೇ ನವಂಬರ್, 2006

(ಕರ್ನಾಟಕ ಪುರಸಭಾ ಗೈಡೆನ್ಸ್ ಆಫ್ ಆಫೀಸರ್ಸ್ ಗ್ರಾಂಟ್ ಆಫ್ ಕಾಫೀಸ್ ಅಂಡ್ ಮಿಸಲೇನಿಯಸ್ ಪ್ರಾವಿಜನ್ಸ್ ರೂಲ್ಸ್ 1966 ನಿಯಮ 39ರ ಪ್ರಕಾರ ಹಾಗೂ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಅಧಿನಿಯಮ 138)

ತೀರ್ಥಹಳ್ಳಿ ಪುರಪಂಚಾಯತ್‌ನ 2007-08ನೇ ಸಾಲಿನ ವಾರ್ಷಿಕ ಹರಾಜಿಗೆ ಸಂಬಂಧಿಸಿದಂತೆ ಸಂತೆ ಸುಂಕ, ಬಸ್‌ಸ್ಟ್ಯಾಂಡ್ ಸುಂಕ ಮತ್ತು ಹಸಿ ಮೀನು ಸುಂಕದ ದರವನ್ನು ದಿನಾಂಕ:31.10.2006ರ ಕೌನ್ಸಿಲ್ ನಿರ್ಣಯ ಕ್ರಮಾಂಕ 123ರಲ್ಲಿ ದರ ನಿಗದಿಪಡಿಸಿದ್ದು, ಸದರಿ ದರದ ಬಗ್ಗೆ ಆಕ್ಷೇಪಣೆಗಳು ಅಥವಾ ಸಲಹೆ ಸೂಚನೆಗಳಿದ್ದಲ್ಲಿ ಸಾರ್ವಜನಿಕರು ಈ ಪ್ರಕಟಣೆ ಪ್ರಕಟಗೊಂಡ 1 ತಿಂಗಳ ಒಳಗಾಗಿ ಲಿಖಿತವಾಗಿ ಪುರಪಂಚಾಯತ್ ಕಛೇರಿಗೆ ಸಲ್ಲಿಸಿದ್ದಲ್ಲಿ ಪರಿಶೀಲಿಸಲಾಗುವುದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಸೂಚಿ**
**ವಿಧಿಸಿದ ದರ**
**ಸಂತೆ ಸುಂಕದ ದರ**

| ಕ್ರಮ ಸಂಖ್ಯೆ | ಬಾಬುಗಳು | ದರ |
|---|---|---|
| 1. | ಹಗ್ಗದ ಅಂಗಡಿ | 10 |
| 2. | ಜವಳಿ ಮತ್ತು ಗುಡಾರದ ಅಂಗಡಿ | 10 |
| 3. | ತೆಂಗಿನಕಾಯಿ ಅಂಗಡಿ | 10 |
| 4. | ಕಟ್ಲೇರಿ ಅಂಗಡಿ | 20 |
| 5. | ಮಡಿಕೆ ಅಂಗಡಿ | 10 |
| 6. | ಮ್ಯಾದರ ಅಂಗಡಿ (ಬಿದಿರಿನಿಂದ ಮಾಡಲ್ಪಟ್ಟ ಸಾಮಗ್ರಿಗಳು) | 6 |
| 7. | ಚಪ್ಪಲಿ ಅಂಗಡಿ | 10 |
| 8. | ಹಣ್ಣಿನ ಅಂಗಡಿ | 10 |
| 9. | ಈರುಳ್ಳಿ, ಆಲುಗಡ್ಡೆ, ಗುಡಾರದ ಅಂಗಡಿ ಮೆಣಸಿನ ಕಾಯಿ | 20 |
| 10. | ಬಳೆ ಅಂಗಡಿ | 6 |
| 11. | ಎಲ್ಲಾ ತರಹದ ಕಾಳಿನ ಗುಡಾರದ ಅಂಗಡಿ | 20 |
| 12. | ಕಬ್ಬಿಣದ ಅಂಗಡಿ | 10 |
| 13. | ಅವಲಕ್ಕಿ, ಮಂಡಕ್ಕಿ ಅಂಗಡಿ | 10 |
| 14. | ಒಣ ಮೆಣಸಿನಕಾಯಿ ಚೀಲ (1) ಒಂದಕ್ಕೆ | 10 |
| 15. | ಅಕ್ಕಿರಾಗಿ ಜೋಳದ ಅಂಗಡಿ | 10 |
| 16. | ವಿಳೆದೆಲೆ ಅಂಗಡಿ | 10 |
| 17. | ಬಾಳೆ ಹಣ್ಣಿನ ಅಂಗಡಿ | 10 |
| 18. | ಅಡಿಕೆ ಹೊಗೆ ಸೊಪ್ಪಿನ ಅಂಗಡಿ | 10 |
| 19. | ಕೋಳಿ ಒಂದಕ್ಕೆ | 2 |
| 20. | ಹೋಟೆಲ್ ಮತ್ತು ಸಿಹಿ ಅಂಗಡಿ | 20 |
| 21. | ಕಸಬರಿಗೆ ಅಂಗಡಿ | 4 |
| 22. | ಬೆಲ್ಲದ ಅಂಗಡಿ | 10 |
| 23. | ಹೂವಿನ ಅಂಗಡಿ | 10 |
| 24. | ಪ್ಲಾಸ್ಟಿಕ್ ಅಂಗಡಿ | 10 |
| 25. | ಎಲ್ಲಾ ತರಹದ ಸೊಪ್ಪಿನ ಅಂಗಡಿ | 6 |
| 26. | ಎಲ್ಲಾ ತರಹದ ತರಕಾರಿ ಚೀಲ (1) ಒಂದಕ್ಕೆ | 4 |

**ಬಸ್‌ಸ್ಟ್ಯಾಂಡ್ ಸುಂಕ**

ಬಸ್‌ಸ್ಟ್ಯಾಂಡ್ ಸುಂಕವನ್ನು 24 ಗಂಟೆಗೆ ಪ್ರತಿ ಬಸ್ಸಿಗೆ 4-00 ರೂಪಾಯಿಯಂತೆ ಸುಂಕ ವಸೂಲಿ ಮಾಡಲು ದರ ನಿಗದಿಪಡಿಸಲಾಗಿರುತ್ತದೆ.

**ಹಸಿಮೀನು ಸುಂಕ**

ಮೀನು ಮಾರ್ಕೆಟ್ ಆವರಣದಲ್ಲಿ ಹಸಿ ಮೀನಿನ ಒಂದು ಬಾಕ್ಸಿಗೆ 1-00 ರೂಪಾಯಿಯಂತೆ ಸುಂಕ ವಸೂಲಿ ಮಾಡಲು ದರ ನಿಗದಿಪಡಿಸಲಾಗಿರುತ್ತದೆ.

ಮುಖ್ಯಾಧಿಕಾರಿ,
ಪುರಪಂಚಾಯತ್, ತೀರ್ಥಹಳ್ಳಿ.

ಪಿ.ಡಿ.22

**ಪುರಸಭೆ ಹಾಗೂ ಯೋಜನಾ ಪ್ರಾಧಿಕಾರ ಸಾಗರ, ಶಿವಮೊಗ್ಗ ಜಿಲ್ಲೆ**
**ಅಧಿಸೂಚನೆ**
**ಸಂಖ್ಯೆ: 1: ಸಾ.ಯೋ.ಪ್ರಾ:ತಾ: ಮಾ:ಪ್ಲ್ಯಾನ್ 1: 2005-06, ದಿನಾಂಕ:13ನೇ ನವಂಬರ್, 2006**

**ವಿಷಯ:** ಸರ್ಕಾರದಿಂದ ಅನುಮೋದನೆಯಾಗಿರುವ ಸಾಗರ ಪಟ್ಟಣದ ಮಾಹಾಯೋಜನೆ-1 ತಾತ್ಕಾಲಿಕ ಯೋಜನೆಯನ್ನು ಪ್ರಕಟಿಸುವ ಬಗ್ಗೆ.

ಕರ್ನಾಟಕ ನಗರ ಮತ್ತು ಗ್ರಾಮಾಂಗರ ಕಾಯ್ದೆ 1961ರ ಪ್ರಕಟಣ 2(7)(20) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಯು.ಡಿ.ಡಿ.355 ಟಿ.ಟಿ.ಪಿ:96 ದಿನಾಂಕ:02.09.1996ರಂತೆ ಯೋಜನಾ ಪ್ರಾಧಿಕಾರವಾಗಿ ಕಾರ್ಯನಿರ್ವಹಿಸುತ್ತಿರುವ ಸಾಗರ ಪುರಸಭೆಯು ರೂಪಿಸಿರುವ 'ಮಹಾಯೋಜನೆ-1 ತಾತ್ಕಾಲಿಕ' ಯೋಜನೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ 1961 ಪ್ರಕರಣ 13(1) ರನ್ವಯ ಸರ್ಕಾರವು ಆದೇಶ ಸಂಖ್ಯೆ: ನಅಇ: 113 ಬೆಂ.ರೂ ಪ್ರಾ: 2004 ಬೆಂಗಳೂರು ದಿನಾಂಕ:04.07.2005ರಂದು ತಾತ್ಕಾಲಿಕ ಅನುಮೋದನೆ ನೀಡಿದೆ. ಅನುಮೋದಿತ 'ಮಾಸ್ಟರ್ ಪ್ಲ್ಯಾನ್-1' ತಾತ್ಕಾಲಿಕ ಯೋಜನೆಯ ನಕ್ಷೆ ಮತ್ತು ನಿಯಮಾವಳಿಗಳ ಪ್ರತಿಯನ್ನು ಸಾರ್ವಜನಿಕರ ಮಾಹಿತಿಗಾಗಿ ಪುರಸಭೆ ಸಾಗರ ಶಿವಮೊಗ್ಗ ಜಿಲ್ಲೆ ಇಲ್ಲಿ ಇಡಲಾಗಿದೆ.

ಸದರಿ "ಮಹಾಯೋಜನೆ-1 ತಾತ್ಕಾಲಿಕ" ಯೋಜನೆಯ ಬಗ್ಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ ಸಾರ್ವಜನಿಕರು ಈ ಅಧಿಸೂಚನೆ ಪ್ರಕಟವಾದ 60 ದಿನಗಳ ಒಳಗಾಗಿ ಖುದ್ದಾಗಿ ಅಥವಾ ನೊಂದಾಣಿ ಅಂಚೆ ಮೂಲಕ ಸಾಗರ ಪುರಸಭೆ ಕಾರ್ಯಾಲಯಕ್ಕೆ ನೀಡತಕ್ಕದ್ದು, ತಡವಾಗಿ ಬಂದ ಆಕ್ಷೇಪಣೆಗಳನ್ನು ಪರಿಶೀಲಿಸಲಾಗುವುದಿಲ್ಲ.

ಮುಖ್ಯಾಧಿಕಾರಿ,
ಯೋಜನಾ ಪ್ರಾಧಿಕಾರ ಪುರಸಭೆ, ಸಾಗರ.

ಪಿ.ಡಿ.23

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ
## ಭೂ ಅರ್ಜನೆ ಅಧಿನಿಯಮ 4(1) ಪ್ರಕರಣದ ಮೇರೆಗೆ ಅಧಿಸೂಚನೆ
## ಕ್ರಮಾಂಕ: ಎಲ್‌ಎಕ್ಯೂಎಸ್‌ಆರ್ 8/ 2004-05, ದಿನಾಂಕ:7ನೇ ಸೆಪ್ಟೆಂಬರ್, 2006

ಇದರ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಮಾಲೂರು ಬಂಗಾರಪೇಟೆ ನೈರುತ್ಯ ರೈಲ್ವೆ ಹಳಿ ದ್ವಿಗುಣಗೊಳಿಸಲು ನಿರ್ಮಾಣಕ್ಕಾಗಿ ಅಗತ್ಯವಾಗಲಿವೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ:

ಕರ್ನಾಟಕ ಅಧಿನಿಯಮದ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ: 1894ರ 1) ರ 4ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸು ಕೊಡಲಾಗಿದೆ. ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ ಕಲಂ 4(2)ನೆಯ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂ ಅರ್ಜನೆ ಅಧಿಕಾರಿ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಸಹಾಯಕ ಕಮೀಷನರ್ ಮತ್ತು ಭೂ ಸ್ವಾಧೀನಾಧಿಕಾರಿಗಳು, ಕೋಲಾರ ಉಪವಿಭಾಗ, ಕೋಲಾರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಈ ಅಧಿಸೂಚನೆ ಪ್ರಕಟವಾದ ಮೂವತ್ತು ದಿನಗಳೊಳಗಾಗಿ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಕಮೀಷನರ್ ಮತ್ತು ಭೂ ಸ್ವಾಧೀನಾಧಿಕಾರಿಗಳು, ಕೋಲಾರ ಉಪ ವಿಭಾಗ, ಕೋಲಾರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಜಮೀನುಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಬೇರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು, ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ (ಏಳನೇ ಖಂಡದ) 24ನೇ ಪ್ರಕರಣದ ಮೇರೆಗಿನ ಗಣನೆಗೆ ತೆಗೆದುಕೊಳ್ಳಬಾರದು.

ಉಪ ವಿಭಾಗಾಧಿಕಾರಿಗಳು ಮತ್ತು ಭೂ ಸ್ವಾಧೀನಾಧಿಕಾರಿ, ಕೋಲಾರ ಉಪ ವಿಭಾಗ, ಕೋಲಾರ ರವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

### ಅನುಸೂಚಿ

**ಜಿಲ್ಲೆ: ಕೋಲಾರ** **ತಾಲ್ಲೂಕು: ಬಂಗಾರಪೇಟೆ** **ಹೋಬಳಿ: ಕಸಬಾ** **ಗ್ರಾಮಗಳು: ಐನೋರಹೊಸಹಳ್ಳಿ**

| ಕ್ರ. ಸಂ. | ಖಾತೆದಾರರ/ ಅನುಭವದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಾದ ಅಂದಾಜು ವಿಸ್ತೀರ್ಣ ಎ.ಗುಂ. | ಮೌಲ್ಯ ನಿರ್ಧರಣೆ ಆಕಾರ ರೂ.ಪೈ. |
|---|---|---|---|---|---|---|---|---|---|
| | | | | ಪೂರ್ವಕ್ಕೆ ಸ.ನಂ. | ಪಶ್ಚಿಮಕ್ಕೆ ಸ.ನಂ. | ಉತ್ತರಕ್ಕೆ ಸ.ನಂ. | ದಕ್ಷಿಣಕ್ಕೆ ಸ.ನಂ. | | |
| 1 | 2 | 3 | 4 | 5 | 6 | 7 | 8 | 9 | 10 |
| 1. | ರಾಮಯ್ಯ ಬಿನ್ ಬೈಚಪ್ಪ, ವಿ.ಎಸ್.ಎಸ್.ಎನ್. ಹುಣಸನಹಳ್ಳಿಗೆ ಆಧಾರ. | 81/1 | ಖುಷ್ಕಿ | ಸರ್ಕಾರಿ ರಸ್ತೆ | 80 | ಸರ್ಕಾರಿ ರಸ್ತೆ | ರೈಲ್ವೆ ಲೈನ್ | 0-04 | 0-19 |
| | | | | | | | ಒಟ್ಟು | 0-04 | |

**(ಒಟ್ಟು ನಾಲ್ಕು ಗುಂಟೆ ಮಾತ್ರ)**

ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ.

ಪಿ.ಆರ್.358

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ

### ಕ್ರಮಾಂಕ: ಆರ್(3) ಎಲ್‌ಎಕ್ಯೂ:ಎಸ್.ಆರ್09: 2003-04, ದಿನಾಂಕ:4ನೇ ನವಂಬರ್, 2006

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಸಾಗರ ತಾಲ್ಲೂಕು ಹಿರೇನೆಲ್ಲೂರು ಮತ್ತು ಮಾಸೂರು ಗ್ರಾಮದ ಸ.ನಂ.265, 266 ಹಾಗೂ ಇತರೆ ಸರ್ವೆ ನಂಬರ್‌ಗಳಲ್ಲಿ ಕಾಗೋಡು ಏತ ನೀರಾವರಿ ಸಲುವಾಗಿ ಈ ಕೆಳಕಂಡ ಜಮೀನುಗಳ ಭೂ ಸ್ವಾಧೀನತೆಯ ಸಲುವಾಗಿ ಅಗತ್ಯವಾಗಿದೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894)ರ (1)4ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಈ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಭೂ ಸ್ವಾಧೀನಾಧಿಕಾರಿ ಹಾಗೂ ಸಾಗರ ಪ್ರಾಂತ್ಯಾಧಿಕಾರಿಗಳಿಗೆ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಭೂ ಸ್ವಾಧೀನಾಧಿಕಾರಿ ಹಾಗೂ ಪ್ರಾಂತ್ಯಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಅಥವಾ ಅದಕ್ಕೂ ಮುಂಚೆ, ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಭೂ ಸ್ವಾಧೀನಾಧಿಕಾರಿ ಹಾಗೂ ಪ್ರಾಂತ್ಯಾಧಿಕಾರಿಗಳು, ಸಾಗರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಭೂ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ ಮೇಲೆ ನಿಯೋಜಿತರಾದ ಯಾವನೇ ಮೋಜಿಣಿದಾರ ಅಥವಾ ಇತರ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು, ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಶಿವಮೊಗ್ಗ ಜಿಲ್ಲಾಧಿಕಾರಿಗಳ ಅನುಮತಿ ಇಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚಗಳನ್ನು ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಭೂ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ 24ನೇ ಪ್ರಕರಣದ ಏಳನೇ (ಖಂಡದ) ಉಪಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಸಾಗರ ಪ್ರಾಂತ್ಯಾಧಿಕಾರಿಗಳ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಸಾಗರ ಹೋಬಳಿ: ತಾಳಗುಪ್ಪ/ ಕಸಬಾ ಗ್ರಾಮ: ಹಿರೇನೆಲ್ಲೂರು, ಮಾಸೂರು**

| ಕ್ರ. ಸಂ. | ವಿವರಣೆಗಳೊಂದಿಗೆ ಕ್ರ.ಸಂ. | ಖಾತೆದಾರರ/ ಅನುಭವದಾರರ ಅಥವಾ ಗೇಣಿದಾರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ತರಹೆ | ಸರ್ವೆ ನಂ. | ಚಕ್ಕುಬಂದಿ | | | | ಭೂ ಸ್ವಾಧೀನ ಪಡಿಸಿಕೊಳ್ಳಬೇಕಾದ ಅಂದಾಜು | |
|---|---|---|---|---|---|---|---|---|---|---|
| | | | | | ಉತ್ತರ ಸ.ನಂ. | ಪೂರ್ವ ಸ.ನಂ. | ದಕ್ಷಿಣ ಸ.ನಂ. | ಪಶ್ಚಿಮ ಸ.ನಂ. | ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
| 1 | 2 | 3 | 4 | 5 | 6 | 7 | 8 | 9 | 10 | 11 |
| **ಹಿರೇನೆಲ್ಲೂರು ಗ್ರಾಮ: ತಾಳಗುಪ್ಪ ಹೋಬಳಿ** | | | | | | | | | | |
| 1. | | ರಾಮಭದ್ರನ ಪುಟ್ಟಪ್ಪ ಬಿನ್ ಮನ್ನಪ್ಪ | ತರಿ | 265 | 266 | 265 | 265 | 265 | 0.05 | 0.63 |
| 2. | | ರಾಮಭದ್ರನ ದ್ಯಾವಪ್ಪ | ತರಿ | 265 | 266 | 265 | 265 | 265 | $0.01^1/_2$ | 0.19 |
| 3. | | ಕೆಂಚನ ಗಣಪತಿ | ತರಿ | 265 | 266 | 265 | 265 | 265 | $0\text{-}01^1/_4$ | 0.16 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 4. | | ಸಿದ್ದನ ರಾಚಪ್ಪ | ತರಿ | 265 | 266 | 265 | 265 | 265 | 0.02 | 0.25 |
| 5. | | ಗೌರಮ್ಮ ಕೋಂ ಕೆ.ಆರ್. ರಾಮಚಂದ್ರ | ತರಿ | 265 | 266 | 265 | 265 | 265 | 0.02 | 0.25 |
| 6. | | ಸಾಲಗೇರಿ ಬಂಗಾರಮ್ಮ ಕೋಂ ರಾಮಚಂದ್ರ | ತರಿ | 265 | 266 | 265 | 265 | 265 | $0.0^{3}/_{4}$ | 0.09 |
| 7. | | ಸಾಲಗೇರಿ ಕನ್ನಪ್ಪ | ತರಿ | 265 | 266 | 265 | 265 | 265 | $0.0^{1}/_{2}$ | 0.06 |
| 8. | | ರಾಂ ಪುಟ್ಟಪ್ಪ | ತರಿ | 265 | 266 | 265 | 265 | 265 | 0.03 | 0.38 |
| 9. | | ಸಾಲಗೇರಿ ದ್ಯಾವಪ್ಪ ಬಿನ್ ಮೈಲಪ್ಪ | ತರಿ | 266 | 267 | 266 | 266 | 266 | $0.0^{1}/_{2}$ | 0.07 |
| 10. | | ಸಾಲಗೇರಿ ಚೌಡಪ್ಪ | ತರಿ | 266 | 267 | 266 | 266 | 266 | $0.01^{3}/_{4}$ | 0.24 |
| 11. | | ಸಾಲಗೇರಿ ದೇವಮ್ಮ | ತರಿ | 266 | 267 | 266 | 266 | 266 | 0.09 | 1.25 |
| 12. | | ಕಾರೇಡಿ ತಿಮ್ಮ | ತರಿ | 266 | 267 | 266 | 266 | 266 | 0.02 | 0.28 |
| 13. | | ಗಿರಿಯ ಕನ್ನಪ್ಪ | ತರಿ | 266 | 267 | 266 | 266 | 266 | $0.02^{3}/_{4}$ | 0.38 |
| 14. | | ಹಳ್ಳಿಗುಡ್ಡೆ ಗೌರಮ್ಮ | ತರಿ | 266 | 267 | 266 | 266 | 266 | $0.02^{1}/_{4}$ | 0.31 |
| 15. | | ಕೆಂಚನಗಣಪತಿ | ತರಿ | 266 | 267 | 266 | 266 | 266 | $0.01^{1}/_{2}$ | 0.21 |
| 16. | | ದೊಡ್ಮನೆ ರಾಮಪ್ಪ | ತರಿ | 267 | 268 | 267 | 267 | 267 | $0.01^{1}/_{4}$ | 0.17 |
| 17. | | ಜಾನಕಮ್ಮ | ತರಿ | 267 | 268 | 267 | 267 | 267 | $0.01^{1}/_{4}$ | 0.17 |
| 18. | | ಸಸರವಳ್ಳಿ ಈರಪ್ಪ | ತರಿ | 267 | 268 | 267 | 267 | 267 | 0.02 | 0.26 |
| 19. | | ಕಲ್ಲೂರು ಶಿವರಾಮ ಮತ್ತು ಲಕ್ಷ್ಮಣ ಜಂಟಿ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 20. | | ಕಾನುಮನೆ ಬೀರಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 21. | | ಹುಲಿಬೀರಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 22. | | ಮೇಲಿನಮನೆ ದ್ಯಾವಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 23. | | ಮೇಲಿನಮನೆ ಬೀರಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 24. | | ಕಾನುಮನೆ ಕೆರಿಯಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 25. | | ಬಿಳಿಯನ ಬೀರಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 26. | | ನೀಲಮ್ಮ ಕೋಂ ಚೌಡಪ್ಪ | ತರಿ | 267 | 268 | 267 | 267 | 267 | $0.0^{1}/_{2}$ | 0.07 |
| 27. | | ಬಿಳಿಯನ ಭೈರಪ್ಪ | ತರಿ | 267 | 268 | 267 | 267 | 267 | 0.01 | 0.13 |
| 28. | | ಬಿಳಿಯನ ಕನ್ನಪ್ಪ | ತರಿ | 267 | 268 | 267 | 267 | 267 | 0.01 | 0.13 |
| 29. | | ಮೇಲಿನಮನೆ ರಾಮಪ್ಪ | ತರಿ | 267 | 268 | 267 | 267 | 267 | $0.01^{1}/_{2}$ | 0.20 |
| 30. | | ಮುತ್ತನರಾಯಪ್ಪ | ತರಿ | 268 | 270 | 268 | 268 | 268 | 0.01 | 0.13 |
| 31. | | ಹುಲ್ತಿಕೊಪ್ಪದ ಕೆರಿಯಪ್ಪ | ತರಿ | 268 | 270 | 268 | 268 | 268 | $0.01^{1}/_{4}$ | 0.17 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 32. | | ಮುತ್ತನ ಕನ್ನಪ್ಪ | ತರಿ | 268 | 270 | 268 | 268 | 268 | $0.01^{1}/_{4}$ | 0.17 |
| 33. | | ದ್ಯಾವಪ್ಪ ಬಿನ್ ಬಸವ | ತರಿ | 268 | 270 | 268 | 268 | 268 | 0.01 | 0.13 |
| 34. | | ಕೋಣೆ ಮೈಲಪ್ಪ | ತರಿ | 268 | 270 | 268 | 268 | 268 | $0.01^{1}/_{4}$ | 0.17 |
| 35. | | ಮಡಿವಾಳ ಪುಟ್ಟಪ್ಪ ಬಿನ್ ಕರಿಯಪ್ಪ | ತರಿ | 268 | 270 | 268 | 268 | 268 | $0.0^{3}/_{4}$ | 0.10 |
| 36. | | ಶೀನಪ್ಪ, ಭರ್ಮಯ್ಯ, ಪಾಪಣ್ಣ, ಮಂಜಪ್ಪ ಜಂಟಿ | ತರಿ | 268 | 270 | 268 | 268 | 268 | $0.0^{3}/_{4}$ | 0.10 |
| 37. | | ದೊಡ್ಮನೆ ಬೀರಪ್ಪ | ತರಿ | 268 | 270 | 268 | 268 | 268 | 0.01 | 0.13 |
| 38. | | ಕೋಣೆ ಮೈಲಪ್ಪ | ತರಿ | 268 | 270 | 268 | 268 | 268 | 0.01 | 0.13 |
| | | | | ಮಾಸೂರು ಗ್ರಾಮ: ಕಸಬಾ ಹೋಬಳಿ: | | | | | | |
| 39. | | ಮಂಜಮ್ಮ ಕೋಂ ಮುತ್ತನ ಕನ್ನಪ್ಪ | ತರಿ | 114 | 114 | 114 | 114 | 114 | 0.06 | 0.79 |
| 40. | | ಮೈಲಪ್ಪ ಬಿನ್ ಕೆರಿಯಪ್ಪ | ತರಿ | 114 | 114 | 114 | 114 | 114 | $0.0^{3}/_{4}$ | 0.10 |
| 41. | ವೆಂಕಟಾಚಲ ಬಿನ್ ಪುಟ್ಟಪ್ಪ (ಖಾತೆದಾರರು) | ಮುತ್ತನ ಕೆರಿಯಪ್ಪ ಬಿನ್ ಕನ್ನಪ್ಪ | ತರಿ | 114 | 114 | 114 | 114 | $0.0^{1}/_{2}$ | $0.0^{1}/_{2}$ | 0.07 |
| | | ಮುತ್ತನ ದ್ಯಾವಪ್ಪ | ತರಿ | 114 | 114 | 114 | 114 | $0.0^{3}/_{4}$ | $0.0^{3}/_{4}$ | 0.10 |
| | | ದೊಡ್ಡಮನೆ ಮೈಲಪ್ಪ ಬಿನ್ ಕರಿಯಪ್ಪ (ಸಾಗುವಳಿದಾರರು) | ತರಿ | 114 | 114 | 114 | 114 | 114 | 0.02 | 0.26 |
| | | | | | | | | ಜುಮ್ಲಾ: | 1.27ಎ. | |

ಎಂ.ಕೆ. ಶ್ರೀರಂಗಯ್ಯ

ಪಿ.ಆರ್.359

ಉಪವಿಭಾಗಾಧಿಕಾರಿ,

ಸಾಗರ ಉಪವಿಭಾಗ, ಸಾಗರ.

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ

## ಕ್ರಮಾಂಕ: ಆರ್(3) ಎಲ್ಎಕ್ಯೂ.ಎಸ್.:ಸಿ.ಆರ್02: 2006-07, ದಿನಾಂಕ:7ನೇ ನವಂಬರ್, 2006

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ತಾಳಗುಪ್ಪ ಗ್ರಾಮದಲ್ಲಿ ಎ.ಪಿ.ಎಂ.ಸಿ. ಸಾಗರದ ಉಪಮಾರುಕಟ್ಟೆ ಪ್ರಾಂಗಣ ಸ್ಥಾಪನೆ ಹಾಗೂ ಅಭಿವೃದ್ಧಿ ಸಲುವಾಗಿ ಅಗತ್ಯವಾಗಿದೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ;

ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894)ರ (1)ರ 4ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಈ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಭೂ ಸ್ವಾಧೀನಾಧಿಕಾರಿ ಹಾಗೂ ಸಾಗರ ಪ್ರಾಂತ್ಯಾಧಿಕಾರಿಗಳಿಗೆ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಭೂ ಸ್ವಾಧೀನಾಧಿಕಾರಿಗಳು ಹಾಗೂ ಉಪವಿಭಾಗಾಧಿಕಾರಿಗಳು, ಸಾಗರ ಇವರನ್ನು ನೇಮಕ ಮಾಡಿದೆ.

ಈ ಭೂಮಿ ಹಾಗೂ ಕಟ್ಟಡಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತಮ್ಮ ಆಕ್ಷೇಪಣೆಗಳು ಯಾವುದಾದರೂ ಇದ್ದಲ್ಲಿ ಅವುಗಳನ್ನು ಈ ಪ್ರಕಟಣೆ ಪ್ರಕಟವಾದ ಮೂವತ್ತು ದಿವಸಗಳೊಳಗಾಗಿ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ ಸಂಖ್ಯೆ 1894ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಭೂ ಸ್ವಾಧೀನಾಧಿಕಾರಿ ಹಾಗೂ ಉಪವಿಭಾಗಾಧಿಕಾರಿ, ಸಾಗರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿ ಹಾಗೂ ಕಟ್ಟಡಗಳ ಮೇಲೆ ನಿಯೋಜಿತರಾದ ಯಾವನೇ ಮೋಜಿಣಿದಾರ ಅಥವಾ ಇತರ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಶಿವಮೊಗ್ಗ ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚಗಳನ್ನು ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ/ ಕಟ್ಟಡಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ 24ನೇ ಪ್ರಕರಣದ ಏಳನೇ ಖಂಡದ (ಉಪಪ್ರಕರಣದ) ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಭೂ ಸ್ವಾಧೀನಾಧಿಕಾರಿ ಹಾಗೂ ಉಪವಿಭಾಗಾಧಿಕಾರಿ, ಸಾಗರ ರವರ ಕಛೇರಿಯಲ್ಲಿ ಸದರಿ ಭೂಮಿ/ ಕಟ್ಟಡಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಸಾಗರ ಹೋಬಳಿ: ತಾಳಗುಪ್ಪ ಗ್ರಾಮ: ತಾಳಗುಪ್ಪ**

| ಕ್ರ. ಸಂ. | ವಿವರಣೆಗಳೊಂದಿಗೆ ಕ್ರ.ಸಂ. | ಖಾತೆದಾರರ/ ಅನುಭವದಾರರ ಅಥವಾ ಗೇಣಿದಾರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ತರಹೆ | ಸರ್ವೆ ನಂ. | ಚಕ್ಕುಬಂದಿ | | | | ಅಗತ್ಯವಾದ ಅಂದಾಜು ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಉತ್ತರ ಸ.ನಂ. | ಪೂರ್ವ ಸ.ನಂ. | ದಕ್ಷಿಣ ಸ.ನಂ. | ಪಶ್ಚಿಮ ಸ.ನಂ. | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | | ಪ್ರೇಮಚಂದ್ ಬಿನ್ ಬಂಗಾರಪ್ಪ | ಖುಷ್ಕಿ | 43/1 | 3 | 43/2 | ಬಿ.ಹೆಚ್. ರಸ್ತೆ | 2 | 1.06 | 5.82 |
| 2. | | ಕೌಸಲ್ಯಮ್ಮ ಕೋಂ ಅನಂತಮೂರ್ತಿ, ಪುರುಷೋತ್ತಮ ಮತ್ತು ಗಾಯತ್ರಿ ಜಂಟಿ | ಖುಷ್ಕಿ | 43/2 | 43/3 | 47/1 | ಬಿ.ಹೆಚ್. ರಸ್ತೆ | 43/1 | 1.15 | 6.97 |
| 3. | | ಕೆ.ಬಿ. ರವಿಕುಮಾರ್ ಬಿನ್ ಬಂಗಾರಪ್ಪ | ಖುಷ್ಕಿ | 47/1 | 47/2 | 48/3 | ಬಿ.ಹೆಚ್. ರಸ್ತೆ | 43/2 | 1.19 | 7.89 |
| 4. | | ಚಂದ್ರಮತಿ ಕೋಂ ಲೋಕೇಶಮೂರ್ತಿ, ಶಶಿಕಲಾ ಬಿನ್ ಲೋಕೇಶಮೂರ್ತಿ. | ಸ.ನಿ. ತರಿ | 48/1 | 48/4 | 49 | ಬಿ.ಹೆಚ್. ರಸ್ತೆ | 48/2 | 1.27 | 8.01 |
| 5. | | ಹರ್ಷ ಬಿನ್ ಬಂಗಾರಪ್ಪ | ಸ.ನಿ. ತರಿ | 48/2 | 48/4 | 48/1 | ಬಿ.ಹೆಚ್. ರಸ್ತೆ | 48/3 | 1.38 | 9.33 |
| 6. | | ಕೌಸಲ್ಯಮ್ಮ ಕೋಂ ಅನಂತಮೂರ್ತಿ, ಪುರುಷೋತಮ್ಮ ಮತ್ತು ಗಾಯತ್ರಿ ಜಂಟಿ. | ಸ.ನಿ. ತರಿ | 48/3 | 48/4 | 48/2 | ಬಿ.ಹೆಚ್. ರಸ್ತೆ | 47 | 1.25 | 7.77 |
| | | | | | | | | ಜುಮ್ಲಾ: | 9.10 ಎ. | |

**ಎಂ.ಕೆ. ಶ್ರೀರಂಗಯ್ಯ**

ಉಪವಿಭಾಗಾಧಿಕಾರಿ,

ಸಾಗರ ಉಪವಿಭಾಗ, ಸಾಗರ.

ಪಿ.ಆರ್.365